

# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | : | 697 |
| ಸದಸ್ಯರ ಹೆಸರು | : | ಶ್ರೀ ಪ್ರತಾಪ್ ಸಿಂಹ ನಾಯಕ್ ಕೆ. |
| ಉತ್ತರಿಸಬೇಕಾದ ದಿನಾಂಕ | : | 17-12-2021 |
| ಉತ್ತರಿಸುವ ಸಚಿವರು | : | ಸಮಾಜ ಕಲ್ಯಾಣ ಮತ್ತು ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಸಮಾಜ ಕಲ್ಯಾಣ ಇಲಾಖೆಯ ಅಧೀನದ ಕ್ರೈಸ್ ಸಂಸ್ಥೆಯ ವಸತಿ ಶಾಲೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಖಾಯಂ ಬೋಧಕ/ಬೋಧಕೇತರ ಸಿಬ್ಬಂದಿಗಳಿಗೆ ಜ್ಯೋತಿ ಸಂಜೀವಿನಿ ಯೋಜನೆಯನ್ನು ವಿಸ್ತರಿಸುವ ಪ್ರಸ್ತಾವನೆ ಯಾವ ಹಂತದಲ್ಲಿದೆ: ವಿಳಂಬವಾಗುತ್ತಿರುವುದಕ್ಕೆ ಕಾರಣಗಳೇನು: (ಪ್ರಸ್ತಾವನೆಯ ಸಂಪೂರ್ಣ ವಿವರ ನೀಡುವುದು) | ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘದ ಅಡಿಯಲ್ಲಿನ ವಸತಿ ಶಾಲಾ/ಕಾಲೇಜುಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಬೋಧಕ/ ಬೋಧಕೇತರ ಸಿಬ್ಬಂದಿಗಳಿಗೆ ಜ್ಯೋತಿ ಸಂಜೀವಿನಿ ಯೋಜನೆಯನ್ನು ವಿಸ್ತರಿಸುವ ಸಂಬಂಧ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯು ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘದ ಖಾಯಂ ನೌಕರರು & ಅವರ ಅವಲಂಬಿತರಿಗೆ ಜ್ಯೋತಿ ಸಂಜೀವಿನಿ ಯೋಜನೆಯನ್ನು ವಿಸ್ತರಿಸಲು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ ಮುಖಾಂತರ ಸುವರ್ಣ ಆರೋಗ್ಯ ಸುರಕ್ಷಾ ಟ್ರಸ್ಟ್‌ನೊಂದಿಗೆ ಸಮಾಲೋಚಿಸಿ ಯೋಜನೆಯನ್ನು ವಿಸ್ತರಿಸುವಂತೆ ಅಭಿಪ್ರಾಯ ನೀಡಿದೆ.<br><br>ಅದರಂತೆ ಕಾರ್ಯನಿರ್ವಾಹಕ ನಿರ್ದೇಶಕರು, ಸುವರ್ಣ ಆರೋಗ್ಯ ಸುರಕ್ಷಾ ಟ್ರಸ್ಟ್ ರವರು ಸಂಘದ ನೌಕರರಿಗೆ ಜ್ಯೋತಿ ಸಂಜೀವಿನಿ ಯೋಜನೆಯನ್ನು ವಿಸ್ತರಿಸುವ ಸಂಬಂಧ ಷರತ್ತುಗಳಿಗೆ ಒಳಪಟ್ಟು ತಾತ್ವಿಕ ಒಪ್ಪಿಗೆ ನೀಡಿರುತ್ತಾರೆ. ಅದರಂತೆ ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘದ ವಸತಿ ಶಾಲೆ/ಕಾಲೇಜುಗಳ ಸಿಬ್ಬಂದಿಗಳ ಅಗತ್ಯ ವಿವರಗಳನ್ನು ಸಂಘದ ಹೆಚ್.ಆರ್.ಎಂ.ಎಸ್ ತಂತ್ರಾಂಶದಲ್ಲಿ ನಮೂದಿಸಲು ಸಂಘದ ಎಲ್ಲಾ ವಸತಿ ಶಾಲೆ/ಕಾಲೇಜುಗಳ ಪ್ರಾಂಶುಪಾಲರುಗಳಿಗೆ ಸೂಚಿಸಲಾಗಿರುತ್ತದೆ.<br><br>ಪ್ರಸ್ತುತ ಲಭ್ಯವಿರುವ ಹೆಚ್.ಆರ್.ಎಮ್.ಎಸ್ ತಂತ್ರಾಂಶದಲ್ಲಿ ಅಗತ್ಯ ಮಾಹಿತಿಗಳನ್ನು ನಮೂದಿಸಲು ತಾಂತ್ರಿಕ ದೋಷವಿದ್ದು, ಇದನ್ನು ಸರಿಪಡಿಸುವಂತೆ ಯೋಜನಾ ನಿರ್ದೇಶಕರು, ಹೆಚ್.ಆರ್.ಎಮ್.ಎಸ್. ಸೆಲ್ ರವರನ್ನು ಕೋರಲಾಗಿದೆ.<br><br>ಈ ಸಂಬಂಧ ಯೋಜನಾ ನಿರ್ದೇಶಕರು, ಹೆಚ್.ಆರ್.ಎಮ್.ಎಸ್. ಸೆಲ್ ರವರು ಪ್ರಸ್ತುತ ಲಭ್ಯವಿರುವ ಹೆಚ್.ಆರ್.ಎಮ್.ಎಸ್ ತಂತ್ರಾಂಶದಲ್ಲಿ ತಾಂತ್ರಿಕ ನ್ಯೂನತೆಗಳನ್ನು ನಿವಾರಿಸಬೇಕಾದಲ್ಲಿ, ತಂತ್ರಾಂಶವನ್ನು ಉನ್ನತೀಕರಿಸಬೇಕಿದ್ದು, ಈ ಪ್ರಕ್ರಿಯೆಗೆ ಸಮಯಾವಕಾಶದ ಅವಶ್ಯಕತೆ ಇರುವುದಾಗಿ ತಿಳಿಸಿರುತ್ತಾರೆ.<br><br>ಆದ್ದರಿಂದ ಹೆಚ್.ಆರ್.ಎಮ್.ಎಸ್. ಸೆಲ್ ವತಿಯಿಂದ ತಾಂತ್ರಿಕದೋಷ ಬಗೆಹರಿಯುವವರೆಗೆ ತಾತ್ಕಾಲಿಕವಾಗಿ ದೃಢೀಕೃತ ದಾಖಲೆಗಳ (Manual Documents) ಆಧಾರದ ಮೇಲೆ |

| | | |
|---|---|---|
| | | ಸಂಘದ ಸಿಬ್ಬಂದಿಗಳಿಗೆ ಯೋಜನೆಯನ್ನು ಪ್ರಾರಂಭಿಸಲು ಕಾರ್ಯನಿರ್ವಾಹಕ ನಿರ್ದೇಶಕರು, ಸುವರ್ಣ ಆರೋಗ್ಯ ಸುರಕ್ಷಾ ಟ್ರಸ್ಟ್ ರವರಿಗೆ ಪತ್ರದ ಮೂಲಕ ಕೋರಲಾಗಿರುತ್ತದೆ.<br><br>ಕಾರ್ಯನಿರ್ವಾಹಕ ನಿರ್ದೇಶಕರು, ಸುವರ್ಣ ಆರೋಗ್ಯ ಸುರಕ್ಷಾ ಟ್ರಸ್ಟ್ ರವರು ಈ ಕ್ರಮಕ್ಕೆ ಅನುಮೋದನೆ ನೀಡಿದ ನಂತರ, ಸಂಘದ ಖಾಯಂ ನೌಕರರಿಗೆ ಜ್ಯೋತಿ ಸಂಜೀವಿನಿ ಯೋಜನೆಯನ್ನು ಅನುಷ್ಠಾನಗೊಳಿಸಲು ಮುಂದಿನ ಕ್ರಮವಹಿಸಲಾಗುವುದು. |
| ಆ) | ಸರ್ಕಾರಿ ಶಾಲೆಗಳು ಹಾಗೂ ಅಲ್ಪಸಂಖ್ಯಾತ ಇಲಾಖೆಯ ಮೊರಾರ್ಜಿ ದೇಸಾಯಿ ವಸತಿ ಶಾಲೆಗಳ ಬೋಧಕ/ಬೋಧಕೇತರ ನೌಕರರಿಗೆ ನೀಡುತ್ತಿರುವ ಸೌಲಭ್ಯವನ್ನು ಸಮಾಜ ಕಲ್ಯಾಣ ಇಲಾಖೆಯ ಅಧೀನದ ಕ್ರೈಸ್ ಸಂಸ್ಥೆಯ ವಸತಿ ಶಾಲೆಗಳ ಬೋಧಕ/ಬೋಧಕೇತರ ನೌಕರರಿಗೆ ನೀಡದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: ಸಮಾನ ಕೆಲಸಕ್ಕೆ ಸಮಾನ ವೇತನ / ಸೌಲಭ್ಯಗಳನ್ನು ನೀಡದಿರಲು ಕಾರಣವೇನು; | ಸರ್ಕಾರಿ ಶಾಲೆಗಳು ಹಾಗೂ ಅಲ್ಪಸಂಖ್ಯಾತ ಇಲಾಖೆಯ ಮೊರಾರ್ಜಿ ದೇಸಾಯಿ ವಸತಿ ಶಾಲೆಗಳ ಬೋಧಕ/ಬೋಧಕೇತರ ನೌಕರರಿಗೆ ಕಾಲಕಾಲಕ್ಕೆ ನಿಗಧಿಪಡಿಸುವ ವೇತನ ಶ್ರೇಣಿ, ತುಟ್ಟಿ ಭತ್ಯೇ, ಮನೆ ಬಾಡಿಗೆ ಭತ್ಯೇ, ವೈದ್ಯಕೀಯ ಭತ್ಯೇ (Medical Allowance) ಗಳಿಕೆ ರಜೆ ನಗದೀಕರಣ, ವೇತನ ಬಡ್ತಿ ಇತ್ಯಾದಿ ಸೌಲಭ್ಯಗಳನ್ನು ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘದ ವಸತಿ ಶಾಲೆ/ಕಾಲೇಜುಗಳ ಬೋಧಕ/ಬೋಧಕೇತರ ಸಿಬ್ಬಂದಿಗಳಿಗೂ ಸಹ ಪಾವತಿಸಲಾಗುತ್ತಿದೆ.<br><br>ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘದ ಬೋಧಕ/ಬೋಧಕೇತರ ಸಿಬ್ಬಂದಿಗಳಿಗೆ ಸರ್ಕಾರಿ ನೌಕರರಿಗೆ ನೀಡಲಾಗುವ ಕೆ.ಜಿ.ಐ.ಡಿ. ಸೌಲಭ್ಯವನ್ನು ವಿಸ್ತರಿಸುವ ಪ್ರಸ್ತಾವನೆಯನ್ನು ಆರ್ಥಿಕ ಇಲಾಖೆಯು ತಿರಸ್ಕರಿಸಿದೆ.<br><br>ವಸತಿ ಶಾಲೆಗಳಲ್ಲಿ ಸೇವೆ ಸಲ್ಲಿಸುತ್ತಿರುವ ಖಾಯಂ ನೌಕರರಿಗೆ ಮರಣ ಉಪದಾನ (DCRG) ಸೌಲಭ್ಯ ವಿಸ್ತರಿಸುವ ಬಗ್ಗೆ ಪ್ರಸ್ತಾವನೆಯು ಆರ್ಥಿಕ ಇಲಾಖೆಯ ಪರಿಶೀಲನೆಯಲ್ಲಿರುತ್ತದೆ.<br><br>ಮುಂದುವರೆದು, ಸಂಘದ ವ್ಯಾಪ್ತಿಯ ಖಾಯಂ ನೌಕರರುಗಳಿಗೆ ಇತರೆ ಸರ್ಕಾರಿ ನೌಕರರುಗಳಿಗೆ ನೀಡುತ್ತಿರುವಂತೆ ವೈದ್ಯಕೀಯ ವೆಚ್ಚ ಮರುಪಾವತಿ, ಮೃತಪಟ್ಟ ಖಾಯಂ ನೌಕರರ ಕುಟುಂಬದ ಸದ್ಯಸ್ಯರಿಗೆ ಅನುಕಂಪ ಆಧಾರದ ಮೇಲೆ ನಿಯಮಾನುಸಾರ ನೌಕರಿ ಹಾಗೂ ದಿ:01.08.2016 ರಿಂದ ಅನ್ವಯವಾಗುವಂತೆ ವಾರ್ಷಿಕ ಗುಂಪು ವಿಮೆ ಸೌಲಭ್ಯವನ್ನು ಕಲ್ಪಿಸಲಾಗಿದ್ದು, ಈವರೆಗೆ ಅರ್ಹರಿರುವ 23 ಮೃತರ ಕುಟಂಬಕ್ಕೆ ಈ ಸೌಲಭ್ಯ ನೀಡಲಾಗಿರುತ್ತದೆ. |
| ಇ) | ವಸತಿ ಶಾಲೆಗಳ ಶಿಕ್ಷಕರಿಗೆ ವಸತಿ ಶಾಲೆಗಳಲ್ಲಿ ಖಾಲಿ ಇರುವ ಪ್ರಾಂಶುಪಾಲರ ಹುದ್ದೆಗಳಿಗೆ ಹಾಗೂ ವಸತಿ ಕಾಲೇಜುಗಳಲ್ಲಿ/ಉನ್ನತೀಕರಿಸಿದ ಶಾಲೆಗಳಲ್ಲಿ ಖಾಲಿ ಇರುವ ಉಪನ್ಯಾಸಕರ ಹುದ್ದೆಗಳಿಗೆ ಬಡ್ತಿ ನೀಡಲು ಕೈಗೊಂಡ ಕ್ರಮಗಳೇನು? | ವೃಂದ ಮತ್ತು ನೇಮಕಾತಿ ನಿಯಮಾವಳಿ ಪ್ರಕಾರ, ಶಿಕ್ಷಕರುಗಳಿಗೆ 50:50 ರಂತೆ ಸಹ ಶಿಕ್ಷಕರುಗಳ ವೃಂದದಿಂದ ಪ್ರಾಂಶುಪಾಲರ ಹುದ್ದೆಗೆ ಬಡ್ತಿ ಅವಕಾಶ ಕಲ್ಪಿಸಲಾಗಿರುತ್ತದೆ.<br><br>ಸರ್ಕಾರದ ಆದೇಶ ಸಂಖ್ಯೆ : ಸಕಇ 19 ಮೊದೇಶಾ 2019, ದಿನಾಂಕ: 22.07.2019ರಲ್ಲಿ ಸಹ ಶಿಕ್ಷಕರುಗಳ ವೃಂದದಿಂದ ಪ್ರಾಂಶುಪಾಲರ ಹುದ್ದೆಗೆ 75:25 (ಬಡ್ತಿ:ನೇರನೇಮಕಾತಿ) ಅನುಪಾತದಲ್ಲಿ ಭರ್ತಿ ಮಾಡಲು ಮತ್ತು ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘದ ವೃಂದ ಮತ್ತು ನೇಮಕಾತಿ ಸಮಗ್ರ ತಿದ್ದುಪಡಿಯಲ್ಲಿ ಸೇರ್ಪಡೆ ಮಾಡಿ ಮಂಜೂರಾತಿ ನೀಡಿ ಆದೇಶಿಸಲಾಗಿದೆ. ಅದರಂತೆ ಅಂತಿಮ ಜೇಷ್ಠತಾ ಪಟ್ಟಿಯನ್ನು ದಿನಾಂಕ: 13.11.2020 ರಂದು ಪ್ರಕಟಿಸಲಾಗಿರುತ್ತದೆ. |

| | | |
|---|---|---|
| | | ದಿನಾಂಕ 27.01.2021 ರಂದು ನಡೆದ ಇಲಾಖಾ ಮುಂಬಡ್ತಿ ಸಮಿತಿ ಸಭೆಯಲ್ಲಿ ಹೈದರಾಬಾದ್-ಕರ್ನಾಟಕ ಮೀಸಲಾತಿ ಹಾಗೂ ರೋಸ್ಟರ್ ಮೀಸಲಾತಿಗೆ ಕುರಿತಂತೆ ಹೈದರಾಬಾದ್-ಕರ್ನಾಟಕ ವಿಶೇಷ ಕೋಶ ಹಾಗೂ ಸಮಾಜ ಕಲ್ಯಾಣ ಇಲಾಖೆಯಿಂದ ಕ್ರಮವಾಗಿ ಸ್ಪಷ್ಟ ಅಭಿಪ್ರಾಯ ಪಡೆದು ಶಿಕ್ಷಕರಿಗೆ ಮುಂಬಡ್ತಿ ನೀಡಲು ಕ್ರಮವಹಿಸಲು ತೀರ್ಮಾನಿಸಲಾಗಿದೆ.<br>ಹೈದರಾಬಾದ್-ಕರ್ನಾಟಕ ಮೀಸಲಾತಿ ಹಾಗೂ ರೋಸ್ಟರ್ ಮೀಸಲಾತಿಗೆ ಕುರಿತಂತೆ ಹೈದರಾಬಾದ್ ಕರ್ನಾಟಕ ವಿಶೇಷ ಕೋಶ ಹಾಗೂ ಸಮಾಜ ಕಲ್ಯಾಣ ಇಲಾಖೆಯಿಂದ ಸ್ಪಷ್ಟೀಕರಣ ಪಡೆಯಲಾಗಿರುತ್ತದೆ.<br>2011 ಮತ್ತು ನಂತರದ ವಿವಿಧ ಸರ್ಕಾರದ ಆದೇಶಗಳಲ್ಲಿ ಕಾಲಕಾಲಕ್ಕೆ ಸಂಘದ ವೃಂದ ಮತ್ತು ನೇಮಕಾತಿ ನಿಯಮಗಳಿಗೆ ತಿದ್ದುಪಡಿ ಮಾಡಿ ಆದೇಶಿಸಲಾಗಿರುತ್ತದೆ. ಸಂಘದ ಕೇಂದ್ರ ಕಛೇರಿ ಹಾಗೂ ವಸತಿ ಶಾಲೆ/ಕಾಲೇಜುಗಳಿಗೆ 2011 ರ ನಂತರ ಮಂಜೂರಾಗಿರುವ ಹುದ್ದೆಗಳನ್ನು ಸೇರ್ಪಡೆಗೊಳಿಸಿ, ಕರ್ನಾಟಕ ರಾಜ್ಯ ಪತ್ರದಲ್ಲಿ ಕರಡು ವೃಂದ ಮತ್ತು ನೇಮಕಾತಿ ನಿಯಮಗಳನ್ನು ಪ್ರಕಟಿಸಲಾಗಿದೆ. ಸದರಿ ಕರಡು ವೃಂದ ಮತ್ತು ನೇಮಕಾತಿ ನಿಯಮಗಳಿಗೆ ಸ್ವೀಕೃತವಾಗಿರುವ ಆಕ್ಷೇಪಣೆಗಳನ್ನು ಪರಿಶೀಲಿಸಿ ಅಂತಿಮ ವೃಂದ ಮತ್ತು ನೇಮಕಾತಿ ನಿಯಮಗಳನ್ನು ಪ್ರಕಟಿಸಿದ ನಂತರ ನಿಯಮಾನುಸಾರ ಮುಂಬಡ್ತಿಗೆ ಕ್ರಮವಹಿಸಲಾಗುವುದು. |

**ಸಂಖ್ಯೆ: ಸಕಇ 543 ಮೊದೇಶಾ 2021**

**(ಕೋಟ ಶ್ರೀನಿವಾಸ ಪೂಜಾರಿ)**
ಸಮಾಜ ಕಲ್ಯಾಣ ಮತ್ತು
ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು